ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಅಗ್ನಿಶಾಮಕ ಠಾಣೆಗಳಲ್ಲಿ ಕೆಲಸ ಮಾಡುವ ಸಿಬ್ಬಂದಿಗಳ ವಸತಿ ಗೃಹಗಳ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

742 (702) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ನಗರದಲ್ಲಿ ಒಟ್ಟು ಎಷ್ಟು ಅಗ್ನಿಶಾಮಕ ಠಾಣೆಗಳಿವೆ; (ಮಾಹಿತಿ ನೀಡುವುದು)

(ಆ) ಈ ಅಗ್ನಿಶಾಮಕ ಠಾಣೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು ; (ಹುದ್ದೆವಾರು ವಿವರ ನೀಡುವುದು)

(ಇ) ಈ ಅಗ್ನಿಶಾಮಕ ಠಾಣೆಗಳ ಪಕ್ಕದಲ್ಲಿ ಎಷ್ಟು ವಸತಿ ಗೃಹಗಳನ್ನು ನಿರ್ಮಾಣ ಮಾಡಲಾಗಿದೆ ; (ಠಾಣಾವಾರು ವಿವರ ನೀಡುವುದು)

(ಈ) ಈ ಅಗ್ನಿಶಾಮಕ ಠಾಣೆಗಳ ವಸತಿ ಗೃಹಗಳನ್ನು ಇಲಾಖೆಯ ಯಾವ ವರ್ಗದ ಸಿಬ್ಬಂದಿಗೆ ಹಂಚಿಕೆ ಮಾಡಲಾಗುತ್ತಿದೆ ; (ಮಾಹಿತಿ ನೀಡುವುದು)

(ಉ) ಠಾಣೆಯ ಅಗ್ನಿಶಾಮಕ ಅಧಿಕಾರಿಗಳು, ಫೈರ್ಮೆನ್, ಫೈರ್ಮೆನ್‌ಚಾಲಕರು, ಗ್ರೇಡಿಂಗ್ ಫೈರ್ಮೆನ್‌ಗಳನ್ನು ಬಿಟ್ಟು ಇಲಾಖೆಯಲ್ಲಿ ಕೆಲಸ ಮಾಡುತ್ತಿರುವ ಲಿಪಿಕ ನೌಕರರಿಗೆ ಸದರಿ ವಸತಿ ಗೃಹಗಳನ್ನು ಹಂಚಿಕೆ ಮಾಡಲಾಗಿದೆಯೇ ;

(ಊ) ಹಾಗಿದ್ದಲ್ಲಿ, ಎಷ್ಟು ವಸತಿ ಗೃಹಗಳನ್ನು ಈ ಲಿಪಿಕ ನೌಕರರಿಗೆ ಹಂಚಿಕೆ ಮಾಡಿದೆ ; (ವಿವರ ನೀಡುವುದು)

(ಋ) ಅಗ್ನಿಶಾಮಕ ಠಾಣೆಯಲ್ಲಿ ಕೆಲಸ ಮಾಡುತ್ತಿರುವ ತುರ್ತು ಸೇವೆಯ ಸಿಬ್ಬಂದಿಗಿಂತ ಇಲಾಖೆಯ ಲಿಪಿಕ ನೌಕರರು ಅತ್ಯಗತ್ಯ ತುರ್ತು ಸೇವೆ ನೌಕರರೆಂದು ಪರಿಗಣಿಸಿ ಇವರಿಗೆ ಆದ್ಯತೆ ನೀಡಿ ಅಗ್ನಿಶಾಮಕ ಠಾಣೆಗಳಲ್ಲಿರುವ ವಸತಿ ಗೃಹಗಳನ್ನು ನೀಡಲಾಗುತ್ತಿದೆಯೇ ;

(ಎ) ಹಾಗಿದ್ದಲ್ಲಿ, ಸರ್ಕಾರ ಯಾವ ಮಾನದಂಡವನ್ನು ಅನುಸರಿಸಿ ವಸತಿ ಗೃಹಗಳನ್ನು ಹಂಚಿಕೆ ಮಾಡಲಾಗುತ್ತಿದೆ ?